




# ಹೊಂಗನಸು

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 31

| | | | | |
|---|---|---|---|---|
| ಸಂಪುಟ: ೦೪ ಸಂಚಿಕೆ: ೫ | ಆಗಸ್ಟ್ ೨೦೧೭ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
| Vol. 04 Issue 5 | August 2017 | Pages - 8 | A. Sub. - Rs. 20/- | Editor : Sri. B.R. Ravindranath |





ಚಂದಾ ವಿವರಗಳು
ವಾರ್ಷಿಕ ಚಂದಾ
ರೂ. ೨೦/–
ಐದು ವರ್ಷಗಳ ಚಂದಾ
ರೂ. ೧೦೦/–



ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೮
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org


## ಶ್ರೀ ವಿ. ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ–೨೦೧೭ "ಜೀವಮಾನ ಸಾಧನೆ"– ಪ್ರಶಸ್ತಿಪ್ರದಾನ ಸಮಾರಂಭ

ಮೇ ೨೦೧೭ ತಿಂಗಳ ಸಂಚಿಕೆಯಲ್ಲಿ, ದಿ॥ ಶ್ರೀ.ವಿ. ನಾಗರಾಜರಾವ್ ಮತ್ತು ಮೊದಲ ಪ್ರಶಸ್ತಿ ಪುರಸ್ಕೃತರಾದ ಶ್ರೀವಸಂತ ನಾಡಿಗೇರ, ಇವರುಗಳು ಪರಿಚಯಾತ್ಮಕ ಲೇಖನವನ್ನು "ದಿ॥ ವಿ.ನಾಗರಾಜರವ್ ಮಾಧ್ಯಮ ಪ್ರಶಸ್ತಿ ಸ್ಥಾಪನೆ" ಎಂಬ ಶೀರ್ಷಿಯಡಿಯಲ್ಲಿ ನೀಡಿದ್ದೆವು. ಪೂರ್ವ ನಿಯೋಜನೆಯಂತೆ ಪ್ರಶಸ್ತಿ ಪ್ರದಾನ ಕಾರ್ಯಕ್ರಮವು ದಿನಾಂಕ ೩೧ನೇ ಮೇ ೨೦೧೭ರಂದು ಜರುಗಿತು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ಪಿ.ವಿ.ನಾರಾಯಣ ಅವರು, ಪ್ರಶಸ್ತಿ ಪ್ರದಾನಮಾಡಲು ಆಗಮಿಸಿದ ಶ್ರೀಮತಿ ನಾಗಮಣಿ. ಎಸ್.ರಾವ್. ಆಕಾಶವಾಣಿಯ ನಿವೃತ್ತ ಹಿರಿಯ ಅಧಿಕಾರಿಗಳು, ಪ್ರಶಸ್ತಿ ಪುರಸ್ಕೃತರು ಮತ್ತು ಹಿರಿಯ ಪತ್ರಕರ್ತರು ಶ್ರೀ ವಸಂತನಾಡಿಗೇರ, ಪ್ರಶಸ್ತಿ ಪುರಸ್ಕೃತರು ಮತ್ತು ಹಿರಿಯ ಪತ್ರಕರ್ತರು ಶ್ರೀ ವಸಂತ ನಾಡಿಗೇರ, ಪ್ರಶಸ್ತಿಯ ಆಯ್ಕೆ ಸಮತಿಯ ಸದಸ್ಯರು ವಿ.ನಾಗರಾಜರಾವ್ ಕುಟುಂಬ ವರ್ಗದವರಿಗೂ ತಮ್ಮ ಪ್ರಾಸ್ತಾವಿಕ ನುಡಿಗಳೊಂದಿಗೆ ಸ್ವಾಗತ ಕೋರಿದರು. ಆಯ್ಕೆ ಸಮಿತಿಯ ಪರವಾಗಿ ಶ್ರೀ ಜಯಪ್ರಕಾಶ್ ನಾರಾಯಣ ಅವರು ಶ್ರೀ ವಸಂತನಾಡಿಗೇರ ಅವರ ಧೀ ಶಕ್ತಿ, ಪದಗಳ ಜೊತೆಗಿನ ಪ್ರಾಂಜಲ ಪ್ರೀತಿ, ಸಂಪಾದಕನು ಅನುಸರಿಸಬೇಕಾದ ಮೂರು "ಎಸ್" ಸೂತ್ರಗಳು (ಸರಳ, ಶಕ್ತಿ, ಸಣ್ಣ) ಆಧುನಿಕ ಪತ್ರಿಕಾ ಯುಗಕ್ಕೆ ಬೇಕಾದ ಬಹುಮುಖ ಮತ್ತು ಬಹುಶ್ರುತ ಪ್ರತಿಭೆಯೆಲ್ಲವೂ ಇವರಲ್ಲಿ ಮೇಳೈಸಿರುವುದರಿಂದ ಇವರು ಮಾಧ್ಯಮ ರಂಗದಲ್ಲಿ ಹೆಸರುವಾಸಿಯಾಗಿದ್ದಾರೆ ಎಂದು ತಿಳಿಸಿದರು. ಪ್ರಶಸ್ತಿ ಪ್ರದಾನ ಮಾಡಿದ ಶ್ರೀಮತಿ. ನಾಗಮಣಿ ಎಸ್.ರಾವ್ ಅವರು, ಆಕಾಶವಾಣಿಯಲ್ಲಿ ಶ್ರೀ ವಿ.ನಾಗರಾಜರಾವ್ ಅವರೊಡನೆ ಕಳೆದ ದಿನಗಳನ್ನು ಸ್ಮರಿಸಿದರು. ಒಬ್ಬ ಲೇಖಕನಾಗಿ, ಅನುವಾದಕನಾಗಿ, ಮಾಧ್ಯಮ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿನ ಅವರ ಆಸಕ್ತಿ ತಮಗೆಲ್ಲರಿಗೂ ಮಾದರಿಯಾಗಿತ್ತೆಂದು ಹೇಳಿದರು.ಒಬ್ಬ ಮೇದಾವಿ ತಂದೆಯ ಬಗ್ಗೆ ಪ್ರೀತಿಯಿಂದ ಸ್ಥಾಪಿಸಿದ ಪ್ರಶಸ್ತಿಯನ್ನು ಸ್ಥಾಪಿಸಿದ ಅವರ ಮಗಳಾದ ಶ್ರೀಮತಿ ರಾಜೇಶ್ವರಿ ಕೃಷ್ಣ ಅವರನ್ನು ಅಭಿನಂದಿಸಿದರು.

ಪ್ರಶಸ್ತಿ ಸ್ವೀಕರಿಸಿದ ಶ್ರೀ ವಸಂತ ನಾಡಿಗೇರ ಅವರು, ಒಂದು ಪತ್ರಿಕೆಯ ಯಶಸ್ಸಿಗೆ ನೇಪಥ್ಯದಲ್ಲಿದ್ದು ಕೊಂಡು, ಪತ್ರಿಕೆಯನ್ನು ರೂಪಿಸುವ ಹೊಣೆಗಾರಿಕೆಯನ್ನು ವಹಿಸಿಕೊಂಡಿರುವ ಎಲ್ಲಾ ಸಂಪಾದಕರಿಗೂ ಕೊಡುವ ಪ್ರಶಸ್ತಿ ಇದಾಗಿದೆ ಎಂದು ಹೇಳಿ ತಮ್ಮ ಪತ್ರಿಕೋದ್ಯಮದಲ್ಲಿನ ಸುದೀರ್ಘವಾದ ಅನುಭವವನ್ನೂ ಹಂಚಿ ಕೊಂಡರು.




ಪ್ರಶಸ್ತಿ ಸ್ವೀಕರಿಸಿದ ಶ್ರೀ ವಸಂತ ನಾಡಿಗೇರ ಅವರು, ಪ್ರಶಸ್ತಿಯನ್ನು ಸ್ಥಾಪಿಸಿದ ಶ್ರೀ ನಾಗರಾಜ ರಾವ್ ಅವರು ಕುಟುಂಬ ವರ್ಗದವರಿಗೆ ಅಭಿನಂದನೆ ಗಳನ್ನು ತಿಳಿಸಿದರು.

ಶ್ರೀ ಅಬ್ದುಲ್ ಬಷೀರ್ ಅವರು ಆಗಮಿಸಿದ್ದ ಎಲ್ಲಾ ಮಾಧ್ಯಮವರ್ಗದವರಿಗೂ, ಅತಿಥಿಗಳಿಗೂ, ವಂದನೆ ಸಲ್ಲಿಸಿದರು.

## ಸಂಪಾದಕೀಯ

ಈ ವರ್ಷದ ಸರ್ವ ಸದಸ್ಯರ ವಿಶೇಷ ಸಭೆಯಲ್ಲಿ ಕೈಗೊಂಡ ನಿರ್ಣಯದಂತೆ ನಮ್ಮ ಪ್ರತಿಷ್ಠಾನದ ಹೆಸರು ಚಿಕ್ಕದಾದ ಚೊಕ್ಕದಾದ ಬಿಎಂಶ್ರೀ ಪ್ರತಿಷ್ಠಾನ ಎಂಬುದಾಗಿರುತ್ತದೆ. ೧೯೮೦ರಲ್ಲಿ ನೋಂದಣಿಯಾದಾಗಿನಿಂದಲೂ ಪ್ರತಿಷ್ಠಾನದ ಹೆಸರು ಅಧಿಕೃತವಾಗಿ ಬಿ ಎಂ ಶ್ರೀ ಸ್ಮಾರಕ ಪ್ರತಿಷ್ಠಾನ, ( ಕನ್ನಡ ಸಾಹಿತ್ಯ ಮತ್ತು ಸಂಶೋಧನಾ ಸೇವಾ ಕೇಂದ್ರ) ಎಂದಿತ್ತು.

ಆದರೆ ಬಳಕೆಯಲ್ಲಿ ಬಿಎಂಶ್ರೀ ಪ್ರತಿಷ್ಠಾನ ಎಂದು ಪ್ರಚಲಿತವಾಗಿತ್ತು. ಜೊತೆಗೆ ಹೆಸರಿನಲ್ಲಿನ ಪದ – ಸ್ಮಾರಕ – ಬಹಳಷ್ಟು ಗೊಂದಲಗಳಿಗೆ ಎಡೆ ಮಾಡಿಕೊಡುತ್ತಿತ್ತು. ಹೀಗಾಗಿ ಬಳಕೆಯಲ್ಲಿರುವ ಹೆಸರನ್ನು ಈಗ ಅಧಿಕೃತಗೊಳಿಸಲಾಗಿದೆ. ಆದರೆ ನಮ್ಮ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಯಾವುದೇ ರೀತಿಯ ವ್ಯತ್ಯಾಸ ಇರುವುದಿಲ್ಲ.

ಹಾಗೆ ನೋಡಿದರೆ ಬರಲಿರುವ ದಿನಗಳಲ್ಲಿ ಪ್ರತಿಷ್ಠಾನವು ಇನ್ನೂ ಹತ್ತು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ. ನಿರೀಕ್ಷಿಸಿ

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು.......

### ಆಗಸ್ಟ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಕಡೆಂಗೊಡ್ಲು ಶಂಕರಭಟ್ಟ | ೧-೮-೧೯೦೪ |
| ಎಂ.ಆರ್. ಶ್ರೀನಿವಾಸ ಮೂರ್ತಿ | ೨-೮-೧೮೯೩ |
| ಯಶವಂತ ಚಿತ್ತಾಲ | ೩-೮-೧೯೨೮ |
| ವಿಕೃ ಗೋಕಾಕ್ | ೯-೮-೧೯೦೯ |
| ಕೆ.ಜಿ. ಕುಂದರಗಾರ | ೧೪-೮-೧೮೯೫ |
| ಮಿರ್ಜಿಅಣ್ಣಾರಾಯ | ೨೫-೮-೧೯೧೮ |

### ಆಗಸ್ಟ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಮಧುರ ಚೆನ್ನ | ೧೫-೮-೧೯೫೩ |
| ಸುರಂ ಎಕ್ಕುಂಡಿ | ೨೦-೮-೧೯೯೫ |
| ತಸು ಶಾಮರಾಯರು | ೨೧-೮-೧೯೯೮ |
| ಕೆ.ಜಿ. ಕುಂದಣಗಾರ | ೨೨-೮-೧೯೬೫ |
| ಚನ್ನಪ್ಪ ಉತ್ತಂಗಿ | ೨೮-೮-೧೯೬೨ |

# ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ಬೆಳೆಯುವ ಗಿಡದ ಬೇರನ್ನು ಕಡಿಯುತ್ತ–
ಮುಗಿಲೆತ್ತರಕ್ಕೆ ತಲೆಯೆತ್ತಿ–'ಮಳೆಸುರಿಸು ನೀರದ
ಗಿಡ ಚಿಗುರಲಿ' ಎಂದು ಗೋಗರೆಯುತ್ತ
ಮೊಸಳೆ ಕಣ್ಣೀರ ಸುರಿಸುವರು;
ಅವರ ಒಳ–ಹೊರ ಬಣ್ಣಗಳ ರುಬ್ಬಿ
ಮಾನವೀಯತೆಯ ಚಿಲುಮೆ ಪುಟಿಯುವಂತೆ
ಮಾಡೋ 'ಅಲ್ಲಾರಖಾ'! ॥೨೩॥

ದೇಶಭಕ್ತಿಯ ಹೆಸರಿನಲ್ಲಿ ರಾಜಕೀಯ ಚದುರಂಗವನ್ನಾಡುತ್ತಾರೆ!
ಮತಧರ್ಮಗಳ ನಡುವೆ ತಂದಿಕ್ಕಿ ತಮಾಷೆಯ ಮಾಡುತ್ತಾರೆ
ಕುಷ್ಠರೋಗಿಗಳ ಸೇವಕರ ಕೊಲ್ಲುತ್ತಾರೆ
ಪ್ರೇಮಿಗಳ ದಿನಾಚರಣೆ ಅಸಂಬದ್ಧವೆಂದು ಪ್ರಲಾಪಿಸುತ್ತಾರೆ
ಪರಧರ್ಮೀಯರ ದೇಶಭಕ್ತಿಯ ತೂರಿ ನೋಡುತ್ತಾರೆ
'ಇದು ನಮ್ಮದು, ಅವರದಲ್ಲ' ಎಂದು ಸಾರಿ ಹೇಳುತ್ತಾರೆ
ಇಂಥ 'ಆಡುವ''ಮಾಡುವ', 'ಕೊಲ್ಲುವ', 'ಪ್ರಲಾಪಿಸುವ',
'ತೂರಿ ನೋಡುವ', ' ಸಾರಿ ಹೇಳುವ' ಕಳ್ಳ ಕೊಕ್ಕರೆಗಳಿಗೆ
ಸದ್ಬುದ್ಧಿ ಕರುಣಿಸಿ ಕಾಪಾಡೋ 'ಅಲ್ಲಾರಖಾ'. ॥೨೪॥

## ಇನ್ನು ಮುಂದೆ ನಮ್ಮ ಹೆಸರು ಬಿ.ಎಂ.ಶ್ರೀ. ಪ್ರತಿಷ್ಠಾನ

ದಿನಾಂಕ ೧ನೇ ಜುಲೈ ೨೦೧೭ ರಂದು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸರ್ವಸದಸ್ಯರ ವಿಶೇಷಸಭೆಯಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹೆಸರನ್ನು **ಬಿ.ಎಂ.ಶ್ರೀ. ಪ್ರತಿಷ್ಠಾನ** ಎಂದು ಬದಲಾಯಿಸಲಾಗಿದೆ.

### ವಾರ್ಷಿಕ ಸರ್ವಸದಸ್ಯರ ಸಭೆ



ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದ ವಾರ್ಷಿಕ ಸರ್ವಸದಸ್ಯರ ಸಭೆಯನ್ನು ದಿನಾಂಕ ೧ನೇ ಜುಲೈ ೨೦೧೭ ರಂದು ನಡೆಸಲಾಯಿತು. ಈ ಸಭೆಯಲ್ಲಿ ವಾಡಿಕೆಯ ಕಲಾಪಗಳನ್ನು ನಡೆಸಲಾಯಿತು. ನಂತರ ಕಾರ್ಯಕಾರಿ ಸಮಿತಿಗೆ ಆಯ್ಕೆಗೊಳ್ಳಲು ವಾಡಿಕೆಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಆಸಕ್ತಿ ತೋರಿಸಿದ ಕಾರಣದಿಂದ ೩೭ನೇ ವಾರ್ಷಿಕ ಸರ್ವಸದಸ್ಯರ ಸಭೆ ಪ್ರತಿಷ್ಠಾನದ ಇತಿಹಾಸದಲ್ಲಿ ಮೊದಲ ಬಾರಿಗೆ ಚುನಾವಣೆ ನಡೆದು ಮೈಲಿಗಲ್ಲನ್ನು ಸ್ಥಾಪಿಸಿತು. ಹೀಗೆ ನಡೆದ ಚುನಾವಣೆಯಲ್ಲಿ ನಾಲ್ವರು ಅರ್ಹ, ಅನುಭವೀ ಸಾಧಕರಾದ ಡಾ॥ ವಿಜಯ ಸುಬ್ಬರಾಜು, ಪ್ರೊ.ಕೊ.ವೆಂ.ರಾಮಕೃಷ್ಣಗೌಡ, ಪ್ರೊ. ಬೈರಮಂಗಲ ರಾಮಗೌಡ ಹಾಗೂ ಪ್ರೊ. ಶಾಂತರಾಜು ಅವರು ಆಯ್ಕೆಗೊಂಡರು.

### ಪ್ರಕಟಣೆ

### ಶಾ. ಬಾಲೂರಾವ್ ಯುವಬರಹಗಾರ ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಪ್ರತಿ ವರ್ಷ ನೀಡುವ ಇಪ್ಪತ್ತೈದು ಸಾವಿರ ರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ.ಬಾಲೂರಾವ್ ಯುವಬರಹಗಾರ ಪ್ರಶಸ್ತಿಗಾಗಿ ೩೫ ವರ್ಷ ವಯಸ್ಸು ಮೀರದ ಯುವ ಬರಹಗಾರರು ರಚಿಸಿದ ೨೦೧೬ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಕೃತಿಗಳನ್ನು ಆಹ್ವಾನಿಸುತ್ತಿದೆ. ಆಸಕ್ತ ಲೇಖಕರು ಪ್ರಕಟಗೊಂಡ ಕೃತಿಯ ಎರಡು ಪ್ರತಿಗಳನ್ನು ತಮ್ಮ ವಿವರಗಳ ಜೊತೆ ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–೫೬೦೦೧೯, ಇವರಿಗೆ ಕಳುಹಿಸಬಹುದು. ಕೊನೆಯ ದಿನಾಂಕ : ೧೦ನೇ ಆಗಸ್ಟ್ ೨೦೧೭

ಸಂಪರ್ಕಿಸಿ : ೦೮೦–೨೬೬೧೫೮೭೭

### ಶಾ.ಬಾಲೂರಾವ್ ಅನುವಾದ ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಪ್ರತಿ ವರ್ಷ ನೀಡುವ ಇಪ್ಪತ್ತೈದು ಸಾವಿರರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ.ಬಾಲೂರಾವ್ ಅನುವಾದ ಪ್ರಶಸ್ತಿಗಾಗಿ ೨೦೧೬ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಬೇರಾವುದೇ ಭಾಷೆಯಿಂದ ಕನ್ನಡಕ್ಕೆ ಅಥವಾ ಕನ್ನಡದಿಂದ ಇಂಗ್ಲೀಷ್‌ಗೆ ಅನುವಾದವಾಗಿರುವ ಕೃತಿಗಳನ್ನು ಆಹ್ವಾನಿಸುತ್ತಿದೆ.

ಆಸಕ್ತ ಲೇಖಕರು ಪ್ರಕಟಗೊಂಡ ಕೃತಿಯ ಎರಡು ಪ್ರತಿಗಳನ್ನು ತಮ್ಮ ವಿವರಗಳ ಜೊತೆ ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–೫೬೦೦೧೯, ಇವರಿಗೆ ಕಳುಹಿಸಬಹುದು. ಕೊನೆಯದಿನಾಂಕ : ೧೦ನೇ ಆಗಸ್ಟ್ ೨೦೧೭

ಸಂಪರ್ಕಿಸಿ : ೦೮೦–೨೬೬೧೫೮೭೭

# ಆಗಸ್ಟ್ ೨೦೧೭ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



### ೦೨-೦೮-೨೦೧೭ ಬುಧವಾರ ಸಂಜೆ- ೬-೦೦ ಗಂಟೆಗೆ

**ಗಮಕವಾಹಿನಿ-೧೯**

'ಪಂಪಭಾರತ' ಸಂಚಿಕೆ-೬ (ಮುಂದುವರೆದ ಭಾಗ)

ವಾಚನ :ಕುಮಾರಿಅರ್ಪಿತಾ

ವ್ಯಾಖ್ಯಾನ :ಡಾ॥ ಕೆ.ಆರ್. ಗಣೇಶ್

ನೇತೃತ್ವ- ಶ್ರೀಮತಿ ಸಿ.ವಿ. ಶ್ರೀಮತಿ



### ೧೬-೦೮-೨೦೧೭ ಬುಧವಾರ ಸಂಜೆ- ೬-೦೦ ಗಂಟೆಗೆ

**ಕನ್ನಡ ಸಂಸ್ಕೃತಿ ದರ್ಶನ**

ಸಾಂಸ್ಕೃತಿಕಚಿತ್ರ ಪ್ರದರ್ಶನ

### ೧೭-೮-೨೦೧೭ ಗುರುವಾರ ಸಂಜೆ ೬:೦೦ ಗಂಟೆಗೆ

**"ಅಕ್ಕರಗೊಟ್ಟಿ"**




ತಿಂಗಳ ಮುಕ್ತ ಸಂಸ್ಕೃತಿಚಿಂತನೆ

ವಿಷಯ :'ಜನ್ನನಯಶೋಧರಚರಿತೆ ಪದ್ಯ :೧.೬.೪:ಒಂದು ವಿಶ್ಲೇಷಣೆ'

(ಧರ್ಮಪರರ್ಗಲ್ಲದೆಮ್ಮಯ
ನಿರ್ಮಲ ಚಾರಿತ್ರಮಿಂಬುಕಯ್ಯದು ನಿನಗಾ।
ಧರ್ಮದ ಪೋದ ಪೊಲಂಬದು
ನರ್ಮದೆಯಿಂಗೆಂಟದೇಕೆ ಕೇಳ್ದಪೆಯೆಮ್ಮಂ॥)

ಚಾಲನೆ: ಡಾ॥ ವಸಂತ ಲಕ್ಷ್ಮೀ

### ೧೯-೦೮-೨೦೧೭ ಶನಿವಾರ ಸಂಜೆ -೬-೦೦ ಗಂಟೆಗೆ

**ಶ್ರೀಮತಿ ರುಕ್ಮಿಣಮ್ಮ-ಶ್ರೀ ಸೀತಾರಾಮರಾವ್ ದತ್ತಿಕಾರ್ಯಕ್ರಮ**



ಉಪನ್ಯಾಸ(ಪ್ರಾತ್ಯಕ್ಷಿಕೆಯೊಡನೆ)

ವಿಷಯ : 'ಇತ್ತೀಚಿನ ಶೋಧ: ಹಲ್ಮಿಡಿಪೂರ್ವಕದಂಬರಕನ್ನಡ ಶಾಸನ'

ಉಪನ್ಯಾಸಕರು : ಡಾ॥ ಟಿ.ಎಂ. ಕೇಶವ

ನಿವೃತ್ತಅಧೀಕ್ಷಕಪುರಾತತ್ವವಿದರು, ಭಾರತೀಯ ಪುರಾತತ್ವ ಸರ್ವೇಕ್ಷಣ.

ಜೊತೆಗೆ : ಶ್ರೀ ಎಸ್. ಕಾರ್ತಿಕ್

ಖ್ಯಾತ ವಿದ್ವಾಂಸರು

### ೩೧-೦೮-೨೦೧೭ ಗುರುವಾರಸಂಜೆ ೬-೦೦ ಗಂಟೆಗೆ

**ದತ್ತಿಕಾರ್ಯಕ್ರಮ**

ಎಂ.ಸುಬ್ಬಯ್ಯ ಹೆಗಡೆ, ಯಂ.ಕೆ. ವಿಜಯಲಕ್ಷ್ಮಿ, ಎನ್ಅನಂತರಂಗಾಚಾರ್, ಅನಂತರಂಗ ಪ್ರತಿಷ್ಠಾನ

ವಿಷಯ :'ಜೈನ ಕಾವ್ಯಗಳಲ್ಲಿ ಮಾನವೀಯ ನೆಲೆಗಳು'

ಉಪನ್ಯಾಸಕರು:ಡಾ॥ ರಂಗಾರೆಡ್ಡಿಕೋಡಿರಾಂಪುರ

## ಆಗಸ್ಟ್ ತಿಂಗಳಿನಲ್ಲಿ ನಡೆಯುವ ದತ್ತಿ ಕಾರ್ಯಕ್ರಮಗಳಿಗೆ ಸಂಬಂಧಿಸಿದ ದತ್ತಿ ನಿಧಿಗಳ ಸಂಕ್ಷಿಪ್ತ ವಿವರಗಳು

| ಕ್ರ.ಸಂ | ಹೆಸರು | ಸ್ಥಾಪಕರು | ವಿಷಯ |
|---|---|---|---|
| ೧. | ಶ್ರೀಮತಿ ರುಕ್ಮಿಣಮ್ಮ, ಶ್ರೀ ಸೀತಾರಾಮರಾವ್ದತ್ತಿ | ಬಿ.ಎಸ್. ಗೋಪಾಲ ಕೃಷ್ಣ | ಸಾಹಿತ್ಯಾತ್ಮಕ |
| ೨. | ಎಂ. ಸುಬ್ಬಯ್ಯ ಹೆಗಡೆ | ಎಂ.ಕೆ. ರವೀಂದ್ರನಾಥ | ಉಪನ್ಯಾಸ |
| ೩. | ಯಂ.ಕೆ. ವಿಜಯಲಕ್ಷ್ಮಿ | ರವಿಕಿರಣ | ಉಪನ್ಯಾಸ |
| ೪. | ಎನ್. ಅನಂತರಂಗಾಚಾರ್ | ಡಾ॥ ಎ. ಜಾನಕಿ | ಉಪನ್ಯಾಸ |
| ೫. | ಅನಂತರಂಗ ಪ್ರತಿಷ್ಠಾನ | ಕೆ.ನಾಗರಾಜು | ಉಪನ್ಯಾಸ |

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಜೂನ್ 2017 – ಜುಲೈ 2017 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## ದಿನಾಂಕ ೨೮–೬–೨೦೧೭ ಬುಧವಾರ

## ಶ್ರೀ ಬಾಪು ರಾಮಣ್ಣ ಮತ್ತು ಶ್ರೀಮತಿ ಜಯಲಕ್ಷಮ್ಮ ದತ್ತಿ ಉಪನ್ಯಾಸ ಕಾರ್ಯಕ್ರಮ



ವಿಷಯ :"ಜಲ–ಜನ"

ಉಪನ್ಯಾಸಕರು:ಡಾ॥ ವೈ.ಲಿಂಗರಾಜು

ಭೂವಿಜ್ಞಾನಿ ಮತ್ತು ಜಲತಜ್ಞ

ಕಳೆದ ಎರಡು ವರ್ಷಗಳಿಂದ ರಾಜ್ಯ ಎದುರಿಸುತ್ತಿರುವ ಭೀಕರ ಕ್ಷಾಮ, ಅಂತರ್ಜಲ ಮಟ್ಟದ ಕುಸಿತ, ಮತ್ತು ಭೂಮಿಯ ದುರ್ಬಳಕೆ/ ಅತಿಯಾದ ಶೋಷಣೆ (ಔತಜಡಿ ಜಥಿಠಟಂಣಚಿಣಂಟಿ ಂಜಿ ಟಚಿಟಿಜ) ನ ಪ' ರಿ ಣಾ ವ' ು ದಿ ಂ ದ', ಮುಂಬರುವ ದಿನಗಳಲ್ಲಿ ನೀರಿನ ಸದ್ಬಳಕೆ ಮತ್ತು ಜನರ ಪಾತ್ರವೇನು, ಈ ವಿಷಯ ಕುರಿತಂತೆ, ಭೂವಿಜ್ಞಾನಿ ಮತ್ತು ವಿಶೇಷವಾಗಿ ಜಲತಜ್ಞರಾಗಿರುವ ಡಾ॥ ವೈ.ಲಿಂಗರಾಜು ಅವರು, "ಜಲ–ಜನ" ಎಂಬ ವಿಷಯವನ್ನು ಕುರಿತು ದತ್ತಿ ಕಾರ್ಯಕ್ರಮದಲ್ಲಿ ಉಪನ್ಯಾಸ ನೀಡಿದರು.

ಭೂ ವಿಜ್ಞಾನಿಯು ಬೆಲೆ ಬಾಳುವ ಖನಿಜಗಳ ಶೋಧನೆಯಲ್ಲೇ ತೊಡಗಿಕೊಳ್ಳಬೇಕೆಂಬ ನಿಯಮವೇನಿಲ್ಲ. ದೇಶದಲ್ಲಿ ನದಿಗಳ ನಿರ್ವಹಣೆ, ನದಿಗಳ ಪುನಶ್ಚೇತನ, ಅಂತರ್ಜಲದ ಮಟ್ಟ ಹೆಚ್ಚಿಸುವ ರೀತಿ, ಭೂ ನಿರ್ವಹಣೆ, ನದಿಗಳ ಪುನಃಶ್ಚೇತನ, ಇವು ನಮ್ಮ ರಾಷ್ಟ್ರದಲ್ಲಿನ ಜ್ವಲಂತ ಸಮಸ್ಯೆಗಳು. ಈ ನಿಟ್ಟಿನಲ್ಲಿ ಸರ್ಕಾರ ಕೈಗೊಂಡಿರುವ ಹಲವಾರು ಯೋಜನೆಗಳು ಮುಂತಾದವುಗಳನ್ನು ಸವಿವರವಾಗಿ, ತಿಳಿಸಿದರು.ನದಿ ಅಳಲು ಎಂಬ ಪದ್ಯದ ವಾಚನವನ್ನು ಮಾಡಿದರು. ಇಸ್ರೋ ಸಂಸ್ಥೆಯ ರಿಮೋಟ್ ಸೆನ್ಸಿಂಗ್ ಟೆಕ್ನಾಲಜಿಯ ಸಹಾಯದಿಂದ ಕೈಗೊಂಡಿರುವ ಕೆರೆ, ಕಲ್ಯಾಣಿ, ನದಿಗಳ ಪುನಃಶ್ಚೇತನ ಯೋಜನೆಗಳಲ್ಲಿ ಇದರ ಪಾತ್ರ ಮುಂತಾದ ವಿಷಯಗಳ ಬಗ್ಗೆ ತಿಳಿಸಿದರು. ಬಹು ಸಂಖ್ಯೆಯಲ್ಲಿ ನೆರೆದಿದ್ದ ಆಸಕ್ತರು, ಉಪನ್ಯಾಸಕರೊಂದಿಗೆ ಸಂವಾದ ಕಾರ್ಯಕ್ರಮದಲ್ಲೂ ಪಾಲ್ಗೊಂಡು ಇಂತಹ ಸಾಹಿತ್ಯೇತರ ಉಪನ್ಯಾಸಗಳಲ್ಲಿಯೂ ತಮ್ಮ ಆಸಕ್ತಿಯನ್ನು ವ್ಯಕ್ತಪಡಿಸಿದರು.

ಡಾ॥ ಪಿ.ವಿ.ನಾರಾಯಣ, ಅಧ್ಯಕ್ಷರು, ಸಭೆಗೆ ಉಪನ್ಯಾಸಕರನ್ನು ಪರಿಚಯಿಸಿದರು. ಶ್ರೀ ರವೀಂದ್ರನಾಥ್, ಕಾರ್ಯದರ್ಶಿ ಇವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಸಂಪನ್ನವಾಯಿತು.

## ೨೯–೦೬–೨೦೧೭

## ಶ್ರೀಮತಿ ಜಯಲಕ್ಷ್ಮಮ್ಮ– ಬಾಪು ರಾಮಣ್ಣ ದತ್ತಿ ದತ್ತಿ ಗಮಕ

ಗಮಕ : ಶ್ರೀಮತಿ ಜಲಜಾರಾಜು

ವ್ಯಾಖ್ಯಾನ: ಡಾ. ಎ.ವಿ. ಪ್ರಸನ್ನ



## ೨೪–೦೬–೨೦೧೭ ರಂಗಸಂವಾದ–೯

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಾಟಕ

ನಾಟಕ :"ನಮ್ಮನ್ನು ಬದುಕಲು ಬಿಡಿ"

ರಚನೆ & ನಿರ್ದೇಶನ : ಶ್ರೀ ವಿಜಯ್ ಎ.




ಪ್ರತಿ ತಿಂಗಳೂ ಕೊನೆಯ ಶನಿವಾರ ಸಂಜೆ ನಡೆಯುವ ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಡೆಸಲಾಗುವ 'ರಂಗ ಸಂವಾದ' ಕಾರ್ಯಕ್ರಮದಲ್ಲಿ ಸಾಮಾಜಿಕ ಚಿಂತನೆಗಳನ್ನು ಒಳಗೊಳ್ಳುವ ನಾಟಕಗಳ ಪ್ರದರ್ಶನ ಮಾಡಲಾಗುತ್ತದೆ. ದಿನಾಂಕ ೨೪ನೇ ಜೂನ್೨೦೧೭ರಂದು "ನಮ್ಮನ್ನು ಬದುಕಲು ಬಿಡಿ"ನಾಟಕವನ್ನು ಪ್ರದರ್ಶಿಸಲಾಯಿತು. ಡಾ. ಪಿ ವಿ ನಾರಾಯಣ ಅವರು ಸ್ವಾಗತವನ್ನು ಕೋರಿ ಕಾರ್ಯಕ್ರಮಕ್ಕೆ ಚಾಲನ ನೀಡಿದರು. ಡಾ. ಅನಿಲ್ ಕುಮಾರ್ ವಂದನಾರ್ಪಣೆ ಸಲ್ಲಿಸಿದರು.

## ೦೨–೦೭–೨೦೧೭ ಗೋವಿಂದ ಜಾಲಿಹಾಳ ದತ್ತಿ ಕಾರ್ಯಕ್ರಮ

## ಭಕ್ತಿಗೀತೆಗಳ ಸ್ಪರ್ಧೆ

ಗೋವಿಂದ ಜಾಲಿಹಾಳ ಕಾರ್ಯಕ್ರಮ ೨–೭–೨೦೧೭ ನೇ ಭಾನುವಾರದಂದು ೧೧–೦೦ ಗಂಟೆಗೆ ಪ್ರಾರಂಭವಾಯಿತು.

ಈ ಕಾರ್ಯಕ್ರಮದಲ್ಲಿ ಶ್ರೀಮತಿ ಎ.ಆರ್.ದೀಪಾರಾವ್ ಮತ್ತು ಶ್ರೀ ಎಂ.ಆರ್. ಅನಂತಮೂರ್ತಿ ಅವರು ತೀರ್ಪುಗಾರರಾಗಿ ಭಾಗವಹಿಸಿದ್ದರು.

ಭಕ್ತಿ ಗೀತೆಗಳ ಗಾಯನ ಸ್ಪರ್ಧೆಯನ್ನು ನಡೆಸಲಾಯಿತು.೨೪ ಸ್ಪರ್ಧಿಗಳು ಭಾಗವಹಿಸಿದ್ದು ಎಲ್ಲರೂ ಸುಶ್ರಾವ್ಯವಾಗಿ ಭಕ್ತಿಗೀತೆಗಳನ್ನು ಹಾಡಿದರು.



ಇದರಲ್ಲಿ ೬ ಮಕ್ಕಳಿಗೆ ಬಹುಮಾನವನ್ನು ವಿತರಣೆ ಮಾಡಲಾಯಿತು. ಅವರ ಹೆಸರುಗಳು ಹೀಗಿವೆ.

೧. ಕುಮಾರಿ ಮಹತಿ – ಮೊದಲನೇ ಬಹುಮಾನ
೨. ಶ್ರೀ ಸುನ್ನಧಿ – ಎರಡನೇ ಬಹುಮಾನ
೩. ಕುಮಾರಿ ನಿಹಾರಿಕಾ ಡಿ. – ಎರಡನೇ ಬಹುಮಾನ
೪. ಕುಮಾರಿ ಶರಣ್ಯ – ಮೂರನೆಯ ಬಹುಮಾನ
೫. ಕುಮಾರಿ ವಾಣಿಶ್ರೀ – ಮೂರನೆಯ ಬಹುಮಾನ
೬. ಕುಮಾರಿ ಚಂದನಾ ಮುರಳೀಧರ – ಮೂರನೆಯ ಬಹುಮಾನ

ಭಾಗವಹಿಸಿದ ಎಲ್ಲಾ ಸ್ಪರ್ಧಿಗಳಿಗೂ ಭಾಗವಹಿಸುವಿಕೆ ಪ್ರಮಾಣ ಪತ್ರವನ್ನು ವಿತರಿಸಲಾಯಿತು.

## ೫-೭-೨೦೧೭ ಗಮಕವಾಹಿನಿ-೧೮



ಹೆಸರು: ಪಂಪಭಾರತಸಂಚಿಕೆ-೫
ವಾಚನ :ಕು.ರಕ್ಷಿತಾ ಕೆ.
ವ್ಯಾಖ್ಯಾನ : ಪ್ರೊ॥ ಟಿ.ಎಸ್. ರಘುನಾಥ್ ನಿವೃತ್ತ ಕನ್ನಡ ಪ್ರಾಧ್ಯಾಪಕರು
ನೇತೃತ್ವ- ಶ್ರೀಮತಿ ಸಿ.ವಿ. ಶ್ರೀಮತಿ

೫-೭-೨೦೧೭ರಂದು ಪ್ರತೀ ತಿಂಗಳ ಮೊದಲ ಬುಧವಾರ ನಡೆಯುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮವಾದ ಗಮಕವಾಹಿನಿ ಮಾಲೆ ಅಡಿಯಲ್ಲಿ ಶ್ರೀಮತಿ ಶ್ರೀಮತಿಯವರ ನೇತೃತ್ವದಲ್ಲಿ "ಪಂಪಭಾರತ – ೫" ಗಮಕವಾಹಿನಿ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು.. ಪಂಪಭಾರತದ ಸಂಗ್ರಹ ಡಾ॥ ಪಿ.ವಿ.ನಾರಾಯಣ.

ಐದನೇ ಕಂತಿನ ಭಾಗವಾಗಿ ಕು.ರಕ್ಷಿತಾ ಸುಶ್ರಾವ್ಯವಾಗಿ ವಾಚನ ಮಾಡಿದರು. ವ್ಯಾಖ್ಯಾನದ ಭಾಗವನ್ನು ಪರಿಣಿತರಾದ ಪ್ರೊ॥ ಟಿ.ಎಸ್. ರಘುನಾಥ್, ನಿವೃತ್ತ ಕನ್ನಡ ಪ್ರಾಧ್ಯಾಪಕರು ಅವರು ನಡೆಸಿಕೊಟ್ಟು ಗಮಕಾಸಕ್ತರ ಮೆಚ್ಚುಗೆ ಗಳಿಸಿದರು.

## ೧೨-೦೭-೨೦೧೭ "ಅಕ್ಕರಗೊಟ್ಟಿ"

## ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : "ಕುಮಾರವ್ಯಾಸ ಭಾರತ ಮತ್ತು ತಂತ್ರಾಂಶ" ಕೆಲವು ಸಮಸ್ಯೆಗಳು"

ಚಾಲನೆ: ಶ್ರೀ ನರಸಿಂಹ ಮೂರ್ತಿ ಜಿ.ಎನ್., ಕಾರ್ಯದರ್ಶಿ, ಕನ್ನಡ ಗಣಕ ಪರಿಷತ್ತು



ಕನ್ನಡ ಗಣಕ ಪರಿಷತ್ತಿನ ಶ್ರೀ ನರಸಿಂಹಮೂರ್ತಿ ಎಂದೇ ಕನ್ನಡ ಸಾರಸ್ವತ ಲೋಕದಲ್ಲಿ ಗುರುತಿಸಲ್ಪಡುವ ಶ್ರೀ ನರಸಿಂಹಮೂರ್ತಿ ಅವರು, ನಿವೃತ್ತ ಬ್ಯಾಂಕ್ ಮ್ಯಾನೇಜರ್. ಕನ್ನಡ ನುಡಿ ತಂತ್ರಾಂಶದ ಜನಕರಲ್ಲಿ ಒಬ್ಬರು. ಪಂಪಭಾರತ ಮತ್ತು ಪಂಪನ ಆದಿಪುರಾಣವನ್ನು ೨೦೦೬ರಲ್ಲಿ ಸುವರ್ಣ ಕರ್ನಾಟಕ ಮಾಲಿಕೆಯಲ್ಲಿ ಅಡಕ ಮುದ್ರಿಕೆಯಲ್ಲಿ ಹೊರತಂದವರು. ಕರ್ನಾಟಕ ಬಹುತೇಕ ಕನ್ನಡ ಸಂಸ್ಥೆಗಳು ಇವರು ಸಿದ್ಧಪಡಿಸಿರುವ ಹಲವಾರು ತಂತ್ರಾಂಶಗಳನ್ನು ಬಳಕೆಮಾಡುತ್ತಿದ್ದಾರೆ, ಹೀಗೆಂದು ಉಪನ್ಯಾಸಕರನ್ನು ಸಭೆಗೆ ಡಾ॥ಪಿ.ವಿ.ನಾರಾಯಣ ಅಧ್ಯಕ್ಷರು ಪರಿಚಯಿಸಿ, ಸರ್ವರನ್ನೂ ಕಾರ್ಯಕ್ರಮಕ್ಕೆ ಆಹ್ವಾನಿಸಿದರು.

ಪೀಠಿಕಾ ಸಂಧಿಯಂಬಂತೆ, ಶ್ರೀ ಮೂರ್ತಿಯವರು, ಕುಮಾರವ್ಯಾಸ ಭಾರತದ ತಂತ್ರಾಂಶವನ್ನು ತಾವು ಈಗ ತುಮಕೂರು ವಿಶ್ವವಿದ್ಯಾಲಯದ ಸಹಯೋಗದೊಂದಿಗೆ ಮಾಡುತ್ತಿರುವುದಾಗಿಯೂ ಮತ್ತು ಶ್ರೇಷ್ಠ ವಿದ್ವಾಂಸರ ಸಲಹಾಸಮಿತಿಯ ಸೂಚನೆ, ಸಲಹೆ ಮೇರೆಗೆ ಈ ಯೋಜನೆಯನ್ನು ಅನುಷ್ಠಾನಕ್ಕೆ ತರಲಾಗುತ್ತಿದೆ ಎಂದು ತಿಳಿಸಿದರು. ಇಲ್ಲಿಯವರೆಗೆ ೯೦೦ಪದ್ಯಗಳನ್ನು ಗಮಕರೂಪದಲ್ಲಿ ಅಳವಡಿಸಲಾಗಿದೆ ಹಾಗೂ ಸರ್ವ,ಸಂಧಿ, ಪದ್ಯ, ಗದ್ಯಾನುವಾದ, ಟಿಪ್ಪಣಿ, ಧ್ವನಿ, ಕ್ಲಿಷ್ಟಪದಗಳ ಅರ್ಥ, ಪದ್ಯಗಳ ಅಕಾರಾದಿ ಸೂಚಿ, ಗಾದೆಗಳ ಸೂಚಿ, ಪರಾಮರ್ಶನ ಸೂಚಿ, ಕುಮಾರ ವ್ಯಾಸ ಭಾರತದ ಪರಿಷ್ಕರಣ ಆವೃತ್ತಿಗಳ ಸೂಚಿ, ಕುಮಾರವ್ಯಾಸ ಭಾರತದ ಬಗ್ಗೆ ಪಿಎಚ್.ಡಿ ಪಡೆದವರ ಸೂಚಿ, ಪ್ರಸಂಗಗಳ ಪರಿವಿಡಿ, ಚಿತ್ರ ಸಂಪುಟದ ಪರಿವಿಡಿ, ಶಾಸನಗಳ ಚಿತ್ರಣ, ಶಾಸನಗಳ ಪಾಠ, ಅಂಕಿ/ಅಂಶಗಳು, ಗಮಕಿಗಳು ವಾಚನ ಮಾಡಿದವರ ಸಂಖ್ಯೆ, ಹೀಗೆ ಇನ್ನೂ ಕೆಲವು ವಿವರಗಳು ಸುಸೂತ್ರವಾಗಿ, ತಂತ್ರಾಂಶದಲ್ಲಿ ಏನೂ ತೊಂದರೆಯಿಲ್ಲದೆ ಕಾರ್ಯನಿರ್ವಹಿಸುತ್ತಿರುವ ಪ್ರಾತ್ಯಕ್ಷಿತೆಯನ್ನು ನೀಡಿ, ಈ ಕಾರ್ಯಕ್ರಮವನ್ನು ಕುತೂಹಲಭರಿತವಾಗಿ ನಡೆಸಿಕೊಟ್ಟರು. ಈವರೆಗೆ ತಂತ್ರಾಂಶದಲ್ಲಿ ಯಾವ ತೊಡಕು ಇಲ್ಲವೆಂದ ಮೂರ್ತಿಯವರು, ತೊಡಕು/ಕ್ಲೇಶಗಳು- ವಾಖ್ಯಾನದಲ್ಲಿ, ಅನ್ವಯಾರ್ಥದಲ್ಲಿ, ಕ್ಲಿಷ್ಟಪದಗಳ ಅರ್ಥೈಸುವಿಕೆಯಲ್ಲಿ , ಪಾಠಾಂತರದ ಸಮಸ್ಯೆಯಲ್ಲಿ. ಕಂಡುಬಂದಿವೆ, ಮುಂದೆಯೂ ಬರುವುದೆಂದು ತಿಳಿಸಿ, ಅವುಗಳನ್ನು ಬಗೆಹರಿಸಲು ವಿದ್ವಾಂಸರ ನೆರವನ್ನು ಯಾಚಿಸಿದರು.

ಶ್ರೀ ರವೀಂದ್ರನಾಥ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ದಿನಾಂಕ ೧೭ನೇ ಜುಲೈ ೨೦೧೭ರಂದು ಗುಬ್ಬಿ ನಾಟಕ ಕಂಪೆನಿ ಹಾಗೂ ಬಿ.ವಿ. ಕಾರಂತ ಅವರ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.




ಚಿಪ್ಪಿಗ: ಇದು ಈಗಿನ ದರ್ಜಿಯನ್ನು ಸೂಚಿಸುವ ಶಬ್ದ. ಇದರ ಮೂಲ ಶಬ್ದ ಸಂಸ್ಕೃತದ 'ಶಿಲ್ಪಿಕ'.ಇದು ಪ್ರಾಕೃತದಲ್ಲಿ ಸಿಪ್ಪಿಗ ಎಂದಾಗಿ ಕನ್ನಡದಲ್ಲಿ ಸಿಂಪಿಗ, ಸಿಂಪಿ, ಚಿಂಪಿಗ, ಚಿಪ್ಪಿಗ ಎಂಬ ರೂಪಗಳನ್ನು ಪಡೆಯುತ್ತದೆ.ಹಾಗೆಯೇ ಇದು ತಮಿಳಿನಲ್ಲಿ ಚಿಪ್ಪಿ, ಚಿಪ್ಪಯನ್ ಎಂದೂ, ತೆಲುಗಿನಲ್ಲಿ ಚಿಪ್ಪೆವಾಡು ಎಂದೂ, ತುಳುವಿನಲ್ಲಿ ಚಿಪ್ಪಿಗ ಎಂದೂ ಆಗುತ್ತದೆ.ನಯಸೇನನ 'ಧರ್ಮಾಮೃತ'ದಲ್ಲಿನ ನರಕದ ವರ್ಣನೆಯಲ್ಲಿ ಪಾಪಿಯನ್ನು ಕತ್ತರಿಸಿ "ಸಿಪ್ಪಿಗನಂತೆ ಪೊಲಿವರ್" ಎಂಬ ವರ್ಣನೆ ಬರುತ್ತದೆ. ಸೂಜಿಯನ್ನು ಹಿಡಿದು ಕೈಯಿಂದ ಬಟ್ಟೆ ಹೊಲಿಯಬೇಕಾದ್ದರಿಂದ ಹೊಲಿಯುವ ಕೆಲಸವನ್ನು ಸೂಜಿಕಾಯಕ ಎಂದೂ ಕರೆಯುತ್ತಿದ್ದರು. ಸೂಜಿ ಕಾಯಕದ ರಾಮಿತಂದೆ ಎಂಬೊಬ್ಬ ವಚನಕಾರ ತನ್ನ ಕಾಯಕವಿವರದ ರೂಪಕದಲ್ಲಿ ಸಾಧನೆಯ ಸ್ವರೂಪವನ್ನು ವಣಿಸುತ್ತಾನೆ; "ತಲೆಗೆ ಮೂರು ಚಿಪ್ಪು, ಅಂಗಕ್ಕಾರು ಚಿಪ್ಪು, ಮಿಕ್ಕಾಗ ಸರ್ವಾಂಗವೆಲ್ಲಕ್ಕೂ ಒಂದೇ ಚಿಪ್ಪಿನ ಕುಪ್ಪಸ."ಇಲ್ಲಿ ಹೇಳಿರುವ ಚಿಪ್ಪು ಪ್ರಾಯಶಃ ಕತ್ತರಿಸಿದ ಬಟ್ಟೆಯ ತುಂಡಿಗೆ ಅನ್ವಯಿಸುತ್ತದೆ.[ಆದ್ದರಿಂದಲೇ ಈ ಕಾಯಕ ಮಾಡುವವನು ಚಿಪ್ಪಿಗ ಎನ್ನಿಸಿಕೊಂಡನೇ?]. ನೆವ ಹೇಳುತ್ತಿದ್ದ ಸಿಂಪಿಗನನ್ನು ಕುರಿತು ಸರ್ವಜ್ಞನು "ಎಳ್ಳು ಗಾಣಿಗ ಬಲ್ಲ; ಸುಳ್ಳು ಸಿಂಪಿಗ ಬಲ್ಲ" ಎನ್ನುತ್ತಾನೆ!

ಹಿಂದೆಯೂ ಬೇರೆ ಬೇರೆ ವೃತ್ತಿಗಳವರ ಸಂಘಗಳಿರುತ್ತಿದ್ದವು. ಕೊತ್ತಟಿ ಎಂದರೆ ಕಾಗೆಗಳ ಗುಂಪು ಮತ್ತು ಜನರ ನೆರವಿ ಎಂಬ ಅರ್ಥಗಳನ್ನು 'ಶಬ್ದಮಣಿದರ್ಪಣ'ವು ಕೊಡುತ್ತದೆ. ಹೀಗಾಗಿ ವೃತ್ತಿಸಂಘಗಳನ್ನು ಆಯಾ ವೃತ್ತಿಗಳವರ 'ಕೊತ್ತಟಿ'ಗಳೆಂದು ಕರೆಯುತ್ತಿದ್ದರು. ಹನ್ನೊಂದನೆಯ ಶತಮಾನದ ಶಾಸನವೊಂದರಲ್ಲಿ ಗಾಣದ ಕೊತ್ತಳಿಗಳು ದೇವರ ಉಪಯೋಗದ ಎಣ್ಣೆಗಾಗಿ ದತ್ತಿ ಬಿಟ್ಟ ಉಲ್ಲೇಖವಿದೆ. ಹಾಗೆಯೇ ದರ್ಜಿಗಳ ವೃತ್ತಿಸಂಘವನ್ನು 'ಸಿಪ್ಪಿಗಗೊತ್ತಳಿ' [ಸಿಪ್ಪಿಗ+ಕೊತ್ತಳಿ] ಎನ್ನುತ್ತಿದ್ದರು. ಹನ್ನೆರಡನೆಯ ಶತಮಾನದ ಶಿಕಾರಿಪುರದ ಶಾಸನವೊಂದರಲ್ಲಿ "ಸಮಸ್ತ ಸಿಪ್ಪಿಗಗೊತ್ತಳಿಯೆಲ್ಲಂ ದೇವರ ಚೈತ್ರಪವಿತ್ರದ ಪರ್ವಕ್ಕೆ" ಒಂದು ಪಣ (ಚಿನ್ನದ ನಾಣ್ಯ)ವನ್ನು ದತ್ತಿಯಾಗಿ ನೀಡಿದ ವಿವರವಿದೆ. ಸಿಂಪಿ ಲಿಂಗಣ್ಣ ಆಧುನಿಕ ಕನ್ನಡದ ಪ್ರಸಿದ್ಧ ಗದ್ಯಲೇಖಕರು.

=====

ಚಿಪ್ಪು: ಇದು ಶುಕ್ತಿ ಎಂಬ ಸಂಸ್ಕೃತ ಪದದ ತದ್ಭವವೆಂದು ಹೇಳುತ್ತಾರೆ; ಪ್ರಾಕೃತದಲ್ಲಿ ಸಿಪ್ಪಿ ಎಂದಾಗುತ್ತದೆ. ಕನ್ನಡದಲ್ಲಿಯೇ ಚಿಂಪಿ, ಚಿಂಪೆ, ಸಿಂಪಿ, ಸಿಂಪೆ, ಸಿರ್ಪು ಮುಂತಾದ ರೂಪಗಳನ್ನು ತಾಳುತ್ತದೆ. ತಮಿಳು, ಮಲಯಾಳಂಗಳಲ್ಲಿ ಚಿಪ್ಪಿ, ಚಿಂಪು ಎಂಬ, ತೆಲುಗಿನಲ್ಲಿ ಚಿಪ್ಪ ಎಂಬ, ತುಳುವಿನಲ್ಲಿ ಚಿಪ್ಪಿ, ತಿಪ್ಪಿ ಎಂಬ ರೂಪಗಳಲ್ಲಿ ಬಳಕೆಯಲ್ಲಿದೆ. ಮೂಲದಲ್ಲಿ ಇದರ ಅರ್ಥ ಸಮುದ್ರದಲ್ಲಿ ದೊರಕುವ ಗಟ್ಟಿ ಕವಚದ ಪದಾರ್ಥ ಎಂದು; ಮುತ್ತಿನ ಚಿಪ್ಪು, ಕಪ್ಪೆ ಚಿಪ್ಪು ಎಂಬಿವು ಸಾಮಾನ್ಯವಾದ ಶಬ್ದಗಳು.ಹೀಗಾಗಿ ಮುಂದೆ ಗಟ್ಟಿಯಾದ ಮೇಲುಕವಚ ಎಂಬ ಅರ್ಥವನ್ನು ಪಡೆಯಿತು; ಜೊತೆಗೆ ಬಟ್ಟಲು ಎಂಬರ್ಥವನ್ನೂ ಪಡೆಯಿತು.

ಸಿಪ್ಪು ಎಂಬ ರೂಪದಲ್ಲಿ ಈ ಶಬ್ದ ಬಟ್ಟಲು ಎಂಬರ್ಥದಲ್ಲಿ 'ಪಂಪಭಾರತ'ದಲ್ಲಿ ಬಳಕೆಯಾಗಿದೆ ("ಪೊನ್ನ ಬೆಳ್ಳಿಯ .. ..ಸಿಪ್ಪುಗಳೊಳ್").ಸಿಂಪು ಎಂಬ ರೂಪದಲ್ಲಿದು ಮುತ್ತಿನ ಚಿಪ್ಪು ಎಂಬರ್ಥದಲ್ಲಿ ಹನ್ನೊಂದನೆಯ ಶತಮಾನದ 'ಕರ್ಣಾಟಕ ಕಾದಂಬರಿ'ಯಲ್ಲಿ ದೊರೆಯುತ್ತದೆ. ("ನಸುದೆಱೆಯುತ್ತುಮಿರ್ದ ಪೊಸಮುತ್ತಿನ ಸಿಂಪುಗಳಿಂ"). ತಲೆಬುರುಡೆಯನ್ನೂ ಈ ಶಬ್ದವು ಸೂಚಿಸುತ್ತದೆ: ರನ್ನಕವಿಯ 'ಅಜಿತಪುರಾಣ'ದಲ್ಲಿ "ಪಳವದ ತಿವಳಯ ಜುಂಕದ ಮೊಳಸಿನ ಜೇಕಿರದ ಸಿವಿಱ ಸಿಪ್ಪಿನ ಲಯದಿಂದ ಎಳಲದೆ ಕುಣಿದರ್" ಎಂಬ ಪ್ರಯೋಗವಿದೆ. ಈ ಶಬ್ದವು ಚಿಪ್ಪು ಎಂಬ ರೂಪದಲ್ಲಿ ತೆಂಗಿನ ಕಾಯಿ ಮುಂತಾದವುಗಳ ಕವಚ ಎಂಬರ್ಥವನ್ನು ಪಡೆಯಿತು. ತೆಂಗಿನ ಚಿಪ್ಪು ಎಂಬುದು ಸಾಮಾನ್ಯ ಬಳಕೆಯಲ್ಲಿನ ಪ್ರಯೋಗ. "ಕೈಗೆ ಚಿಪ್ಪು ಕೊಡು" ಎಂಬುದು ನಿರ್ಗತಿಕನನ್ನಾಗಿಸು ಎಂಬರ್ಥದ ನಾಣ್ಣುಡಿ. ಸಿಂಪಿ ಎಂಬ ರೂಪದಲ್ಲಿದು ಒಳಲೆಯನ್ನೂ ಸೂಚಿಸುತ್ತದೆ.ಬಾಳೆಯ ಹಣ್ಣುಗಳಿರುವ ಬೇರ್ಪಡಿಸಬಹುದಾದ ಗುಂಪಿಗೆ ಚಿಪ್ಪು ಎಂಬುದುಸಾಮಾನ್ಯವಾಗಿ ಬಳಸುವ ಪದ.ಮುಂದೆ ಸಿಪ್ಪೆ ಎಂಬ ರೂಪದಲ್ಲಿ ಈ ಶಬ್ದಕ್ಕೆ ಹೊರಮೈ ಎಂಬ ಅರ್ಥ ಪ್ರಾಪ್ತವಾಯಿತು. ಹಣ್ಣಿನ ಸಿಪ್ಪೆ ಸಾಮಾನ್ಯ ಬಳಕೆಯ ಶಬ್ದ. 'ಹಣ್ಣು ತಿಂದವನು ತಪ್ಪಿಸಿಕೊಂಡ, ಸಿಪ್ಪೆ ತಿಂದವನು ಸಿಕ್ಕಿಹಾಕಿಕೊಂಡ' ಎಂಬುದು ಜನಬಳಕೆಯಲ್ಲಿರುವ ಒಂದು ಗಾದೆ. 'ಸಿಪ್ಪೆಗಟ್ಟು' ಎಂಬ ರೂಪವು ಹೆಕ್ಕಳಿಕೆಯುಂಟಾಗು ಎಂಬರ್ಥದಲ್ಲಿ ಬಳಕೆಯಾಗುತ್ತದೆ. ●

## ಸೇವಾ ಶುಲ್ಕ ಕಡಿತ

ಸಂಘ ಸಂಸ್ಥೆಗಳು ನಡೆಸುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಅನುಕೂಲ ಮಾಡಿಕೊಡಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಭಾಂಗಣಗಳ ಸೇವಾ ಶುಲ್ಕಗಳನ್ನು ಗಣನೀಯವಾಗಿ ಕಡಿತಗೊಳಿಸಲಾಗಿದೆ

ಸಭಾಂಗಣಗಳ ಸೇವಾ ಶುಲ್ಕವನ್ನು ದಿನಾಂಕ 1–6–2017ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪರಿಷ್ಕರಿಸಲಾಗಿದೆ. ಬಳಕೆದಾರರು ಎಂದಿನಂತೆ ಸಹಕರಿಸಬೇಕಾಗಿ ಕೋರಿಕೆ.

**ಸಭಾಂಗಣಗಳ ಸೇವಾ ಶುಲ್ಕದ ವಿವರ**

| | ಎಂವಿಸೀ ಸಭಾಂಗಣ | ಶಾ.ಬಾಲೂರಾವ್ ಮಾತಿನಮನೆ | ತರಗತಿ ಕೊಠಡಿ |
|---|---|---|---|
| **1) ಸೋಮವಾರದಿಂದ ಶುಕ್ರವಾರದವರೆಗೆ** | | | |
| ಬೆಳಿಗ್ಗೆ 10–30 ರಿಂದ 2–00ರ ವರೆಗೆ ಅಥವಾ | 1,000 | 500 | 500 |
| ಮಧ್ಯಾಹ್ನ 3–30 ರಿಂದ 7–00ರ ವರೆಗೆ | 1,000 | 500 | 500 |
| ಬೆಳಿಗ್ಗೆ 10–30 ರಿಂದ ಸಂಜೆ 7–00ರ ವರೆಗೆ | 2,000 | 1,000 | 1,000 |
| **2) ಶನಿವಾರ, ಭಾನುವಾರ ಹಾಗೂ ಸರ್ಕಾರಿ ರಜಾ ದಿನಗಳಲ್ಲಿ** | | | |
| ಬೆಳಿಗ್ಗೆ 10–30 ರಿಂದ 2–00ರ ವರೆಗೆ ಅಥವಾ | 2,500 | 1,000 | 1,000 |
| ಮಧ್ಯಾಹ್ನ 2–00 ರಿಂದ 5–00ರ ವರೆಗೆ | 2,500 | 1,000 | 1,000 |
| ಬೆಳಿಗ್ಗೆ 10–30 ರಿಂದ ಸಂಜೆ 5–00ರ ವರೆಗೆ | 5,000 | 2,000 | 2,000 |

ವಿ.ಸೂಚನೆ: ಎಲ್.ಇ.ಡಿ. ಪ್ರೊಜೆಕ್ಟರ್ ಬಳಕೆಗೆ ರೂ. 250/– ಪ್ರತಿ 3 1/2 ಘಂಟೆಗಳ ಬಳಕೆಗೆ ಹೆಚ್ಚುವರಿ ಶುಲ್ಕ

ಹವಾ ನಿಯಂತ್ರಕ ವ್ಯವಸ್ಥೆ ಬಳಕೆಗೆ ರೂ. 250/– ಪ್ರತಿ 3 1/2 ಘಂಟೆಗಳ ಬಳಕೆಗೆಹೆಚ್ಚುವರಿ ಶುಲ್ಕ

ಸಭಾಂಗಣ ಶುಲ್ಕವನ್ನು ಪೂರ್ಣವಾಗಿ ಪಾವತಿಸಿ ಸಭಾಂಗಣವನ್ನು ಕಾಯ್ದಿರಿಸುವುದು. ಅಲ್ಲದೆ ರೂ. 1,000/–(ರೂ.ಒಂದು ಸಾವಿರ)ವನ್ನು ಮುಂಗಡವಾಗಿ ಕೊಡತಕ್ಕದ್ದು. ಮುಂಗಡ ಹಣವನ್ನು ಕಾರ್ಯಕ್ರಮದ ನಂತರ ಹಿಂತಿರುಗಿಸಲಾಗುವುದು.

ವಿ.ಸೂ : 1) ತಿಂಡಿ–ಪಾನೀಯಗಳನ್ನು ಸಭಾಂಗಣದೊಳಗೆ ಸೇವಿಸಲು ಅನುಮತಿ ಇಲ್ಲ.

2) ಸಭಾಂಗಣಗಳ ಆಸ್ತಿ ಪಾಸ್ತಿಗಳಿಗೆ ಹಾನಿಯಾದಲ್ಲಿ ಸಂಘಟಕರು ಜವಾಬ್ದಾರಿ ವಹಿಸಿಕೊಳ್ಳತಕ್ಕದ್ದು.

3) ಸಂಘಸಂಸ್ಥೆಗಳು ನಡೆಸುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ಮಾತ್ರ ಎಂ.ವಿ.ಸೀ. ಸಭಾಂಗಣವನ್ನು ನೀಡಲಾಗುವುದು.

4) ಕೌಟುಂಬಿಕ ಕಾರ್ಯಕ್ರಮಗಳಿಗೆ ಸಭಾಂಗಣಗಳನ್ನು ನೀಡಲಾಗುವುದಿಲ್ಲ.

## 37ನೇ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ಚುನಾಯಿತರಾದ ಕಾರ್ಯಕಾರಿ ಸಮಿತಿ ಸದಸ್ಯರಿಗೆ ಹೊಂಗನಸು ಅಭಿನಂದಿಸುತ್ತದೆ.

ನೂತನವಾಗಿ ಚುನಾಯಿತರಾದ ಕಾರ್ಯಕಾರಿ ಸಮಿತಿ ಸದಸ್ಯರ ವಿವರಗಳು

### ಡಾ॥ ವಿಜಯಾ ಸುಬ್ಬರಾಜ್



ವಿದ್ಯಾರ್ಹತೆ: ಬಿಎಸ್ ಸಿ, ಎಂ ಎ,, ಪಿಹೆಚ್ ಡಿ ಎಂ ಎ(ಇಂಗ್ಲೀಷ್), ಎಲ್.ಎಲ್.ಬಿ, ಫ್ರೆಂಚ್ ಭಾಷೆಯಲ್ಲಿ ಡಿಪ್ಲೋಮಾ, ಸಾಹಿತ್ಯ ರತ್ನ(ಹಿಂದಿ)

ವೃತ್ತಿ: ಪ್ರಾಧ್ಯಾಪಕರು(ನಿವೃತ್ತ), ಎಂ. ಇ. ಎಸ್, ಕಾಲೇಜು, ಭೆಂಗಳೂರು

ಪ್ರಕಟಿತ ಕೃತಿಗಳು: ೧೨ ಕವನ ಸಂಕಲನಗಳು, ೯ ಕಾದಂಬರಿಗಳು, ೭ ಸಣ್ಣಕಥೆಗಳ ಸಂಕಲನಗಳು, ೮ ವಿಮರ್ಶಾ ಕೃತಿಗಳು, ೧೧ ಜೀವನ ಚರಿತ್ರೆಗಳು, ೧೪ ನಾಟಕಗಳು, ೨ ಮಕ್ಕಳ ಕಾದಂಬರಿಗಳು, ೧೪ ರೇಡಿಯೋ ಲೇಖನಗಳು, ನೂರಾರು ಬಿಡಿ ಲೇಖನಗಳು,

ಪುರಸ್ಕಾರಗಳು: ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಒಳಗೊಂಡಂತೆ ೨೬ಕ್ಕೂ ಹೆಚ್ಚು ಪ್ರಶಸ್ತಿ ಪುರಸ್ಕಾರಗಳು,

ರೂ. ಹತ್ತು ಸಾವಿರ ನಗದು ಹಾಗೂ ಸ್ಮರಣಿಕೆಗಳನ್ನು ಒಳಗೊಂಡಿರುವ ಈ ಪ್ರಶಸ್ತಿಯನ್ನು ಪ್ರತಿಷ್ಠಾನದ ಸಂಯೋಜನಾಧಿಕಾರಿ ಡಾ. ವಿಜಯಾ ಸುಬ್ಬರಾಜ್ ಅವರು ೨೦೧೪ ರಲ್ಲಿ ರೂ. ಎರಡು ಲಕ್ಷಗಳ ದತ್ತಿಯನ್ನು, ಪ್ರತಿ ವರ್ಷ ತಮ್ಮ ಹೆಸರಿನಲ್ಲಿ "ಗಣ್ಯ ಲೇಖಕಿ" ಪುರಸ್ಕಾರವನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಗಣನೀಯ ಸೇವೆ ನೀಡಿರುವ ಲೇಖಕಿಗೆ ನೀಡಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುತ್ತಾರೆ.

### ಪ್ರೊ॥ ಶಾಂತರಾಜು



ಸಹಪ್ರಾಧ್ಯಾಪಕರರು ಹಾಗೂ ಕನ್ನಡ ವಿಭಾಗದ ಮುಖ್ಯಸ್ಥರು ವಿಜಯಾ ಕಾಲೇಜು ಬೆಂಗಳೂರು.

ಹಲವಾರು ಲೇಖನಗಳು, ೧೫ ಕೃತಿಗಳ ಸಂಪಾದನೆ, ಟಿ.ವಿ ಮತ್ತು ರೇಡಿಯೋಗಳಲ್ಲಿ ಕಾರ್ಯಕ್ರಮ, ೨೦ಕ್ಕೂ ಮೀರಿ ನಾಟಕಗಳಲ್ಲಿ ಅಭಿನಯ ಕೆಂಪೇಗೌಡಪ್ರಶಸ್ತಿ, ಕುವೆಂಪು ಸಾಹಿತ್ಯ ರತ್ನ ಪ್ರಶಸ್ತಿಗಳನ್ನು ಪಡೆದಿರುತ್ತಾರೆ.



### ಡಾ॥ ಬೈರಮಂಗಲ ರಾಮೇಗೌಡ

ವಿಮರ್ಶಾ ಗ್ರಂಥಗಳು, ಕಥಾಸಂಕಲನ, ವ್ಯಕ್ತಿ ಚಿತ್ರ , ಜಾನಪದ ಕೃತಿಗಳು ವ್ಯಕ್ತಿಚಿತ್ರಗಳನ್ನು ರಚಿಸಿರುತ್ತಾರೆ.

ಹಲವಾರು ಸ್ಮರಣೆ ಸಂಚಿಕೆಗಳೂ ಪುಸ್ತಕಮಾಲೆಗಳು ಹಾಗೂ ಸಾಹಿತ್ಯ ಅಕಾಡೆಮಿಯ ವಾರ್ತಾಪತ್ರ ಮುಂತಾದವುಗಳ ಸಂಪಾದಕಾಗಿ ಸೇವೆ ಅಧ್ಯಕ್ಷ ಬಿಎಮ್ ಸಂಜೆ ಪದವಿ ಮಹಾವಿದ್ಯಾಲಯ ಬೆಂಗಳೂರು ಹಾಗೂ ಹಲವಾರು ಸಂಘಸಂಸ್ಥೆಗಳಲ್ಲಿ ಪದಾಧಿಕಾರಿ ಹಾಗೂ ಹಲವಾರು ಸಮಿತಿಗಳಲ್ಲಿ ಸದಸ್ಯತ್ವ. ರಾಮನಗರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ, ಸಾಹಿತ್ಯ ಕೌಸ್ತುಬ ಪ್ರಶಸ್ತಿ, ವಿಶ್ವಮಾನವ ಪ್ರಶಸ್ತಿ, ಮುರುಘಾಶ್ರೀ ಪ್ರಶಸ್ತಿ ನಾಡಪ್ರಭು ಕೆಂಪೇಗೌಡ ಪ್ರಶಸ್ತಿ ಕರ್ನಾಟಕ ರತ್ನಶ್ರೀ ಪ್ರಶಸ್ತಿ ಮುಂತಾದ ಪ್ರಶಸ್ತಿಗಳು.

### ಡಾ॥ಕೋ.ವೆಂ. ರಾಮಕೃಷ್ಣೇಗೌಡ



ಡಾ॥ಕೋ.ವೆಂ. ರಾಮಕೃಷ್ಣೇಗೌಡ ಅವರು ಪ್ರಗತಿಪರ ಚಿಂತಕ ಮೂರು ಕವನ ಸಂಕಲನ, ಮೂರು ವಿಮರ್ಶಾ ಸಂಕಲನ, ಕನ್ನಡ ಚಿಂತನೆ ಕೇಂದ್ರಿತ ಐದು ಕೃತಿಗಳು, ಒಂದು ಸಂಶೋಧನಾ ಕೃತಿ, ನಾಲ್ಕು ವ್ಯಕ್ತಿಚಿತ್ರಗಳು ಹೀಗೆ ಒಟ್ಟು ೧೬ಕೃತಿಗಳ ರಚನೆ, ಎಂಭತ್ತಕ್ಕೂ ಅಧಿಕ ಕೃತಿಗಳನ್ನು ಸಂಪಾದನೆ ಕನ್ನಡ ಪರ ಚಳುವಳಿಗಳಲ್ಲಿ ಕಳೆದ ಮೂವತ್ತೈದು ವರ್ಷಗಳಿಂದ ಕ್ರಿಯಾತ್ಮಕವಾಗಿ ತೊಡಗಿಕೊಂಡು ಬರುತ್ತಿದ್ದಾರೆ. ಮೂವತ್ತೇಳು ವರ್ಷಗಳಿಂದ ನಾಡುನುಡಿಗೆ ಸೇವೆ ಸಲ್ಲಿಸುತ್ತಿರುವ ಕನ್ನಡ ಸಂಘರ್ಷ ಸಮಿತಿಯ ಅಧ್ಯಕ್ಷರು.

'ಕನ್ನಡ ಭೂಷಣ', ರಾಮ್ ಜಾದವ್ ರಾಜ್ಯಮಟ್ಟದ ಪಉಸ್ತಕ, ಸರ್. ಎಂ. ವಿಶ್ವೇಶ್ವರಯ್ಯ, ಕರುನಾಡಸಿರಿ, ಗಡಿನಾಡಧ್ವನಿ ಶಿಕ್ಷಣರತ್ನ, ಕುವೆಂಪು, ಕನ್ನಡಸೇವಾರತ್ನ ಇನ್ನು ಹಲವಾರು ಪ್ರಶಸ್ತಿಗಳು ೧೧೦ ಅಧಿಕ ಸಂಘಸಂಸ್ಥೆಗಳಿಂದ ಸ್ಮನಾನ ಸ್ವೀಕಾರ.

## ೩೭ನೆ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ನಿವೃತ್ತರಾದ ಕಾರ್ಯಕಾರಿ ಸಮಿತಿ ಸದಸ್ಯರಿಗೆ ಧನ್ಯವಾದಗಳು.

ನಿವೃತ್ತ ಸದಸ್ಯರ ವಿವರಗಳು

### ಪ್ರೊ. ಜಿ. ಅಬ್ದುಲ್ ಬಷೀರ್



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ, ಖ್ಯಾತ ಸಾಹಿತಿ, ಹಿರಿಯ ಸಂಸ್ಕೃತಿ ಚಿಂತಕರು ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ಹೊರತರುತ್ತಿರುವ 'ಕರ್ನಾಟಕ ಲೋಚನ' ಎಂಬ ಷಾಣ್ಮಾಸಿಕ ವಿದ್ವತ್ ಪತ್ರಿಕೆ-ಯ ಮಾಜಿ ಸಂಪಾದಕರು ಆದ ಪ್ರೊ. ಜಿ. ಅಬ್ದುಲ್ ಬಷೀರ್ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ಸಂಪಾದಕರು

### ಎಂ.ಜಿ. ನಾಗರಾಜ್



ಗಣಿತ ಪ್ರಾಧ್ಯಾಪಕ ಮತ್ತು ಪ್ರಾಚಾರ್ಯರಾಗಿ ನಿವೃತ್ತಿ ಹೊಂದಿದ ಡಾ॥ ಎಂ.ಜಿ.ನಾಗರಾಜ್, ಇತಿಹಾಸ ಸಂಶೋಧನೆ ಮತ್ತು ಶಾಸನ ಕ್ಷೇತ್ರಗಳಲ್ಲಿ ಪರಿಣಿತರಾಗಿದ್ದಾರೆ. ಇವರ ಕೊಡಗು ಜಿಲ್ಲೆ ಸಮಗ್ರ ಸಾಂಸ್ಕೃತಿಕ ಅಧ್ಯಯನ ಗಮನಿಸ ಬೇಕಾದ ಅಂಶ. ಕೊಡಗು ಜಿಲ್ಲೆ ಸುಗ್ಗಿ ಕಟ್ಟೆಗಳು, ಕೊಡಗಿನ ಕೈಮಡಗಳು, ಕೊಡಗಿನ ಅರಸರು, ಕೊಡಗಿನ ಹಾಲೇರಿ ರಾಜವಂಶ, ದೇವರಕಾಡು, ಇವರ ಮುಖ್ಯ ಕೃತಿಗಳು. ಇವುಗಳಲ್ಲಿ ಕೆಲವು ಕೊಡಗು ಭಾಷೆಗೆ ಅನುವಾದಿತವಾಗಿವೆ. ಹಲವು ಸ್ಮರಣ ಸಂಪುಟಗಳ ಮತ್ತು ನಿಯತ ಕಾಲಿಕೆಗಳ ಸಂಪಾದಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಹದಿನೈದಕ್ಕಿಂತ ಹೆಚ್ಚು ಪ್ರಶಸ್ತಿ, ಗೌರವ, ಮತ್ತು ಸನ್ಮಾನಗಳನ್ನು ಪಡೆದಿದ್ದಾರೆ. ಒಳ್ಳೆಯ ವಾಗ್ಮಿಗಳಾದ ಇವರು ಈಗಲೂ ಮಿಥಿಕ್ ಸೊಸೈಟಿ ಮತ್ತು ಕರ್ನಾಟಕ ಇತಿಹಾಸ ಅಕಾದೆಮಿಯಲ್ಲಿ ಕ್ರಿಯಾಶೀಲರಾಗಿದ್ದಾರೆ.

### ಶ್ರೀ ಬಿ.ಎಸ್. ಗುರುಪ್ರಸಾದ್

ಜನ್ಮದಿನಾಂಕ : ೨೬-೦೫-೧೯೫೦

ವಿದ್ಯಾಭ್ಯಾಸ : ಬಿ.ಎಸ್ಸಿ, ಬಿ.ಕಾಂ. , ಶಾಸನ ಶಾಸ್ತ್ರದಲ್ಲಿ ಡಿಪ್ಲೊಮಾ,

ವೃತ್ತಿ ವಿವರ : ಭಾರತೀಯ ಜೀವ ಬಿಮಾ ನಿಗಮದಲ್ಲಿ ಆಡಳಿತಾಧಿಕಾರಿಯಾಗಿ ನಿವೃತ್ತಿ ಹೊಂದಿದ್ದು ಪ್ರಸ್ತುತ ಜೀವ ಬಿಮಾ ನಿಗಮದಲ್ಲಿ ಪ್ರತಿನಿಧಿಯಾಗಿರುತ್ತಾರೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ೩ ವರ್ಷಗಳಿಂದ ಹಸ್ತಪ್ರತಿ ಸಂರಕ್ಷಣಾ ಕಾರ್ಯದಲ್ಲಿ ತೊಡಗಿಸಿಕೊಂಡಿರುತ್ತಾರೆ. ಕರ್ನಾಟಕ ಇತಿಹಾಸ ಅಕಾದೆಮಿಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುತ್ತಾರೆ. ಜೊತೆಗೆ ಚಾರಣ, ಪಕ್ಷಿವೀಕ್ಷಣೆ, ಛಾಯಾಗ್ರಹಣ ಚಟುವಟಿಕೆಗಳಲ್ಲದೇ ಹಲವಾರು ಸಂಘಸಂಸ್ಥೆಗಳ ಜೊತೆ ಒಡನಾಟ ಹೊಂದಿರುತ್ತಾರೆ.

## ಬಿ. ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸಿರುವ ಪುಸ್ತಕಗಳ ಕಿರುಪರಿಚಯ

ಸೀತಾರಾಮಯ್ಯ (ಎಂ. ವಿ)
ಕದಂಬ : ಸಮಗ್ರ ಸಂಶೋಧನಾ ಲೇಖನಗಳ ಸಂ. ಪುಟ.
(ಎಂ. ವಿ. ಸೀ. ಸಮಗ್ರ ಸಾಹಿತ್ಯ ಮಾಲೆ –1)
(ಬಿ. ಎಂ. ಶ್ರೀ ಪ್ರತಿಷ್ಠಾನದ 50 ನೇ ಪ್ರಕಟಣೆ)
ಪು :ಥತು–388 ಬೆಲೆ ರೂ 100–00 / ರೂ. 80/–
(ಗ್ರಂಥಾಲಯ ಪ್ರತಿ 1993

'ರಾಘವ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಪ್ರೊ. ಎಂ.ವಿ. ಸೀತಾರಾಮಯ್ಯನವರ ಸಮಗ್ರ ಸಂಶೋಧನಾ ಲೇಖನಗಳ ಸಂಪು. ಇದು ಎಂ. ವಿ. ಸೀ.ಅವರು 80ನೇ ವರ್ಷ ಪೂರೈಸುವ ನೆನಪಿಗಾಗಿ 'ಅಭಿನಂದನಾ'ಸಂಪುಟವಾಗಿ ಪ್ರಕಟವಾಗಬೇಕಿದ್ದು ವಿಧಿವಶಾತ್‌ಅವರ ಅಕಾಲಿಕ ನಿಧನದಿಂದಾಗಿ 'ಸಂಸ್ಕರಣ' ಗ್ರಂಥವಾಗಿ ಪ್ರಕಟವಾಗಿದೆ. ಆರಂಭದಲ್ಲಿ ಎಂ.ವಿ. ಸೀ ಅವರ ಎಂಬತ್ತು ಲೇಖನದ ಸಮಗ್ರ ಸಂಪುಟ ಹೊರತರುವ ಯೋಜನೆ ಇತ್ತಾದರೂ ಪ್ರಸಕ್ತ 'ಕದಂಬ' ಕೃತಿಯಲ್ಲಿ ಸಂಶೋಧನಾ ಲೇಖನಗಳನ್ನು ಮಾತ್ರ ಸೇರಿಸಲಾಗಿದೆ.

ಈ ಕೃತಿಯಲ್ಲಿ 32 ಸಂಶೋಧನಾ ಲೇಖನಗಳಿದ್ದು ಕಾವ್ಯ ಮೀಮಾಂಸೆ ವ್ಯಾಕರಣ, ಛಂದಸ್ಸು, ಕವಿ ಕಾಲ ವಿಚಾರ ಹಾಗೂ ಸಂಶೋಧನೆ ಸಂಕೀರ್ಣ ಎಂಬ ಐದು ಶೀರ್ಷಿಕೆಗಳಡಿಯಲ್ಲಿ ಈ ಲೇಖನಗಳನ್ನು ಅಳವಡಿಸಲಾಗಿದೆ. 'ಕದಂಬ'ಶೀರ್ಷಿಕೆ ಎಂ.ವಿ. ಸೀ. ಅವರೇಸೂಚಿಸಿದ್ದಹೆಸರು. ಕನ್ನಡದ ಮೊಟ್ಟಮೊದಲ ರಾಜವಂಶದ ಹೆಸರಿನಿಂದ ಹಿಡಿದು ಇದಕ್ಕೆ ಅನೇಕ ಅರ್ಥಗಳೀವೆ. ಸೀತಾರಾಮಯ್ಯನವರ ಬಹುಶ್ರುತ ಪಾಂಡಿತ್ಯ ಈ ಲೇಖನಗಳಲ್ಲಿ ಸ್ಪುಟವಾಗಿ ಕಂಡು ಬರುತ್ತದೆ.

ವೆಂಕಟಾಚಲಶಾಸ್ತ್ರೀ (ಟಿ. ವಿ) ಸಂ.
ಶ್ರೀಸಾಹಿತ್ಯ ಮಣಿ ಮಾಲೆ :ಆಚಾರ್ಯ
ಬಿ. ಎಂ.ಶ್ರೀಕಂಠಯ್ಯನವರ ಅಸಂಕಲಿತ ಬರಹಗಳೂ, ಭಾಷಣಗಳು ಇತ್ಯಾದಿ.
ಪು : 8+238 ಬೆಲೆ ರೂ 150/– 2008

ಆಚಾರ್ಯ ಬಿ.ಎಂ.ಶ್ರೀ ಕಂಠಯ್ಯನವರ ಬರಹಗಳ, ಭಾಷದಿಂದ ಸಮಗ್ರ ಸಂಪುಟವನ್ನು 'ಶ್ರೀಸಾಹಿತ್ಯ' ಎಂಬ ಶೀರ್ಷಿಕೆಯಲ್ಲಿ ಮೈಸೂರುವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ (ಈಗ ಕುವೆಂಪು ಅಧ್ಯಯನ ಸಂಸ್ಥೆ) 1983ರಲ್ಲಿ ಅವರಜನ್ಮ ಶತಮಾನೋತ್ಸವದ ಅಂಗವಾಗಿ ಪ್ರಕಟಸಿತ್ತು. ಆದರೆ ಬಿ.ಎಂ.ಶ್ರೀ ಯವರ ಇನ್ನು ಅನೇಕ ಬರಹಗಳೂ, ಭಾಷಣಗಳು ಸಂಕಲನಗೊಳ್ಳದೆ ಇದ್ದು ಅವುಗಳನ್ನು ಸಂಗ್ರಹಿಸಿ ಪ್ರಕಟಿಸುವ ಒಂದು ಪ್ರಯತ್ನ ಇದಾಗಿದೆ. ಈ ಸಂಪುಟದಲ್ಲಿ ಒಟ್ಟು 128 ಲೇಖನಗಳಿವೆ. ಶ್ರೀಯವರ ಭಾಷಣಗಳ ಉಲ್ಲೇಖಗಳು ಮತ್ತು ಕೈ ಬರಹದ ಮಾದರಿಗಳನ್ನು ಪ್ರಕಟಿಸಲಾಗಿದೆ ಕನ್ನಡ ಸಾಹಿತ್ಯದ ಅಧ್ಯಯನಕ್ಕೆ ಇದು ಒಂದು ಪ್ರಮುಖ ಆಕರ ಗ್ರಂಥವಾಗಿರುತ್ತದೆ.


**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-07-2017**


## ೨೦೧೭ ಆಗಸ್ಟ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ೨೦೧೭ರ ಜೂನ್ ತಿಂಗಳಿನಲ್ಲಿ ೨ ಗ್ರಂಥಗಳ ಶುಷ್ಕ ಶುದ್ದೀಕರಣ, ೧ ಮಸಿ+ತೈಲ, ೩ ಗ್ರಂಥ ಪತ್ರಗಳ ಮರುಜೋಡಣೆ ಕಾರ್ಯ, ೨ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೧ ಗ್ರಂಥಗಳಿಗೆ ಬಟ್ಟೆ ಕಟ್ಟುವಿಕೆ ಕಾರ್ಯ , ಮತ್ತು ೩ ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ.

೨೦೨೮ ಪುಟಗಳ ವಿಶೇಷವಾದ ಕಾಗದದಲ್ಲಿ ಬರೆದ ವಾಲ್ಮೀಕಿ ರಾಮಾಯಣದ ಹಸ್ತಪ್ರತಿ ಗ್ರಂಥವನ್ನು ಸಂರಕ್ಷಿಸಿ ಸ್ಕ್ಯಾನ್ ಮಾಡಿ ಸಂರಕ್ಷಿಸಿದೆ. ಭಾಷೆ: ಸಂಸ್ಕೃತ, ಲಿಪಿ : ಕನ್ನಡ ಇದೊಂದು ಸಮಗ್ರವಾದ ಗ್ರಂಥ.

ಪ್ರತಿಷ್ಠಾನವು ವೇ॥ಬ್ರ॥ಶ್ರೀ ಪ್ರೊ.ಕೆ.ಎನ್. ನರಸಿಂಹಮೂರ್ತಿಯವರು ಸಂರಕ್ಷಣೆ ಸಲುವಾಗಿ ನೀಡಿರುವ ೧೨ ತಾಳೆಗರಿಗಳ ಗ್ರಂಥಗಳನ್ನು ಸ್ವೀಕರಿಸಿದೆ.ಸಂರಕ್ಷಣಾ ಕಾರ್ಯವು ಪ್ರಗತಿಯಲ್ಲಿದೆ.

## ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/– (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/– ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.

## ಕೋರಿಕೆ :

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.


**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath


**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ..............................................................................

..............................................................................

..............................................................................


ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭